# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1782 |
| ಸದಸ್ಯರ ಹೆಸರು | : | ಶ್ರೀ ಎಸ್. ರುದ್ರೇಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 14-03-2022 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

***

| | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯದಲ್ಲಿ ಯಾವ ಯಾವ ಮೂಲಗಳಿಂದ ಎಷ್ಟು ವಿದ್ಯುತ್ ಉತ್ಪಾದಿಸಲಾಗುತ್ತಿದೆ; | ರಾಜ್ಯದಲ್ಲಿ 2021-22 ನೇ ಸಾಲಿನ (ಏಪ್ರಿಲ್-2021ರಿಂದ ಫೆಬ್ರುವರಿ-2022ರ ಅಂತ್ಯಕ್ಕೆ) ವಿವಿಧ ಮೂಲಗಳಿಂದ ಲಭ್ಯವಾದ ವಿದ್ಯುತ್ತಿನ ಪ್ರಮಾಣದ ವಿವರಗಳು ಕೆಳಕಂಡಂತಿವೆ: (ಕೋಷ್ಟಕ ಕೆಳಗೆ) |

| ವಿದ್ಯುತ್ತಿನ ಮೂಲಗಳು | 2021-22 ನೇ ಸಾಲಿನ (ಏಪ್ರಿಲ್-2021ರಿಂದ ಫೆಬ್ರುವರಿ-2022ರ ಅಂತ್ಯಕ್ಕೆ) ಲಭ್ಯವಾದ ವಿದ್ಯುತ್ ಪ್ರಮಾಣ (ಮಿ.ಯೂ)(ತಾತ್ಕಾಲಿಕ) |
|---|---|
| ಜಲವಿದ್ಯುತ್ | 12255.409 |
| ಶಾಖೋತ್ಪನ್ನ | 15463.481 |
| ಕೇಂದ್ರುಸರ್ಕಾರ ಸ್ವಾಮ್ಯದ ವಿದ್ಯುತ್ ಉತ್ಪಾದನಾ ಘಟಕಗಳಿಂದ ರಾಜ್ಯದಪಾಲು | 11853.17 |
| ಅಸಂಪ್ರದಾಯಿಕ ಮೂಲಗಳಿಂದ | 25102.931 |
| ಬೃಹತ್ ಐ.ಪಿ.ಪಿ. | 1191.764 |
| ಜಿಂದಾಲ್ | 524.492 |
| **ಒಟ್ಟು** | **66391.247** |

| | ಪ್ರಶ್ನೆ | ಉತ್ತರ |
|---|---|---|
| ಆ) | ವಿದ್ಯುತ್ ಪ್ರಸರಣಕ್ಕೆ ನಿಯೋಜಿತ ವಿದ್ಯುತ್ ವಾಹಕಗಳ ವೋಲ್ಟೇಜ್ ಎಷ್ಟು; | ವಿದ್ಯುತ್ ಪ್ರಸರಣಕ್ಕೆ ನಿಯೋಜಿತವಾದ ವಿದ್ಯುತ್ ವಾಹಕಗಳ ವೋಲ್ಟೇಜ್ 765 ಕೆವಿ, 400 ಕೆವಿ, 220 ಕೆವಿ, 110 ಕೆವಿ ಹಾಗೂ 66 ಕೆವಿ ಗಳಾಗಿರುತ್ತದೆ. |

...2

<table>
<tr>
<td>ಇ)</td>
<td>ವಿದ್ಯುತ್ ಪ್ರಸರಣದಲ್ಲಿ ಆಗುವ ನಷ್ಟ ಎಷ್ಟು ವಿದ್ಯುತ್ ಪ್ರಸರಣ ನಷ್ಟವನ್ನು ಕಡಿಮೆ ಮಾಡಲು ಸರ್ಕಾರ ಕೈಗೊಂಡ ಕ್ರಮಗಳೇನು?</td>
<td>ರಾಜ್ಯದಲ್ಲಿ ಕಳೆದ ಮೂರು ವರ್ಷಗಳಲ್ಲಿ ವಿದ್ಯುತ್ ಪ್ರಸರಣ ನಷ್ಟದ ವಿವರಗಳು ಕೆಳಕಂಡಂತಿವೆ.<br>
<table>
<tr><th>ವರ್ಷ</th><th>ಪ್ರಸರಣ ನಷ್ಟ (% ಗಳಲ್ಲಿ)</th></tr>
<tr><td>2018-19</td><td>3.161</td></tr>
<tr><td>2019-20</td><td>3.129</td></tr>
<tr><td>2020-21</td><td>3.025</td></tr>
<tr><td>2021-22 (ಡಿಸೆಂಬರ್-21 ಅಂತ್ಯದವರೆಗೆ)</td><td>2.972</td></tr>
</table>
ವಿದ್ಯುತ್ ಪ್ರಸರಣ ನಷ್ಟವನ್ನು ಕಡಿಮೆ ಮಾಡಲು ಕವಿಪ್ರನಿನಿ ವತಿಯಿಂದ ಹೊಸ ವಿದ್ಯುತ್ ಉಪಕೇಂದ್ರಗಳ ಸ್ಥಾಪನೆ, ಹೊಸ ವಿದ್ಯುತ್ ಪ್ರಸರಣ ಮಾರ್ಗಗಳ ನಿರ್ಮಾಣ, ವಿದ್ಯುತ್ ಉಪಕೇಂದ್ರದಲ್ಲಿ ಪರಿವರ್ತಕಗಳ ಸಾಮರ್ಥ್ಯ ಹೆಚ್ಚಳ, ಹಳೆಯ ವಾಹಕಗಳ ಬಲವರ್ಧನೆ ಹಾಗೂ ಬದಲಾವಣೆ ಮತ್ತು ವಿದ್ಯುತ್ ಉಪಕೇಂದ್ರಗಳ ನಡುವೆ ಲಿಂಕ್ ಲೈನ್‌ಗಳನ್ನು ಸೃಷ್ಟಿಸುವ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದ್ದು, ಇದರಿಂದ ವಿದ್ಯುತ್ ಪ್ರಸರಣ ನಷ್ಟವು ಇಳಿಕೆಯಾಗಿರುತ್ತದೆ.</td>
</tr>
<tr>
<td>ಈ)</td>
<td>ರಾಷ್ಟ್ರೀಯ ಪ್ರಸರಣ ಜಾಲದಿಂದ ಲಭ್ಯವಾಗುವ ವಿದ್ಯುತ್ ಪ್ರಮಾಣವೆಷ್ಟು ಮತ್ತು ರಾಷ್ಟ್ರೀಯ ಪ್ರಸರಣ ಜಾಲಗಳ ಸಾಮರ್ಥ್ಯ ಎಷ್ಟು?</td>
<td>ಕೇಂದ್ರ ಸರ್ಕಾರ ಸ್ವಾಮ್ಯದ ವಿದ್ಯುತ್ ಉತ್ಪಾದನಾ ಘಟಕಗಳಿಂದ ಲಭ್ಯವಾದ ವಿದ್ಯುತ್ ಪ್ರಮಾಣ 2021-22 ನೇ ಸಾಲಿನಲ್ಲಿ (ಏಪ್ರಿಲ್-2021 ರಿಂದ ಫೆಬ್ರವರಿ-2022ರ ಅಂತ್ಯದವರೆಗೆ) 11853.17 ಮಿ.ಯೂ (ತಾತ್ಕಾಲಿಕ) ಗಳಾಗಿರುತ್ತದೆ.<br>
ಕೇಂದ್ರ ಸರ್ಕಾರದ ಪ್ರಸರಣ ಜಾಲಗಳ ಸಾಮರ್ಥ್ಯವು ಫೆಬ್ರವರಿ-2022 ರಲ್ಲಿ ಇದ್ದಂತೆ 6824.89 ಮೆ.ವ್ಯಾ.ಗಳನ್ನು ರಾಜ್ಯಕ್ಕೆ ರವಾನಿಸುವಲ್ಲಿ ಶಕ್ತವಾಗಿರುತ್ತದೆ.</td>
</tr>
</table>

ಸಂಖ್ಯೆ: ಎನರ್ಜಿ 57 ಇಬಿಎಸ್ 2022

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು